



# ಹೊಂಗನಸು




ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 78

ಸಂಪುಟ: ೧೦ ಸಂಚಿಕೆ: ೦೧ | ಏಪ್ರಿಲ್ ೨೦೨೨ | ಪುಟಗಳು ೮ | ವಾರ್ಷಿಕ ಚಂದಾ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 10 Issue: 01 | April 2022 | Pages - 8 | Editor : Sri. B.R. Ravindranath


ಶ್ರೀ ಶಕ ೧೯೪೫ ಶುಭಕೃತ ನಾಮ ಸಂವತ್ಸರ ಉತ್ತರಾಯಣ ವಸಂತ ಋತು ಚಾಂದ್ರಮಾನ ಚೈತ್ರಮಾಸ ಸೌರಮಾನ ಮೇಷ




ಚಂದಾ ವಿವರಗಳು
ವಾರ್ಷಿಕ ಚಂದಾ : ರೂ. ೨೦/–
ಐದು ವರ್ಷಗಳ ಚಂದಾ : ರೂ. ೧೦೦/–



ಬಿ.ಎಂ.ಶ್ರೀ. ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೮
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ :೨೬೬೧೫೮೭೭
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಬೆಳಗ್ಗೆ 10–30ರಿಂದ ಸಂಜೆ 5–30ಗಂಟೆ.
ವಾರದ ರಜಾದಿನ : ಮಂಗಳವಾರ




ಹೊಂಗನಸು ಓದುಗರಿಗೆ
ಯುಗಾದಿ ಹಬ್ಬದ ಶುಭಾಶಯಗಳು ಶುಭಕೃತ ನಾಮ ಸಂವತ್ಸರವು
ಸರ್ವರಿಗೂ ಸನ್ಮಂಗಳವನ್ನುಂಟು ಮಾಡಲಿ



೧೫–೦೩–೨೦೨೨

## ಪ್ರೊ.ಎಲ್.ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿ ಮತ್ತು ಶ್ರೀ ವಿ.ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ ಪ್ರದಾನ ಕಾರ್ಯಕ್ರಮ



ಬಿ.ಎಂ.ಶ್ರೀ. ಪ್ರತಿಷ್ಠಾನದ ಪ್ರತಿಷ್ಠಿತ ಪ್ರಶಸ್ತಿಗಳಾದ ಪ್ರೊ.ಎಲ್.ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿ ಮತ್ತು ಶ್ರೀವಿ.ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ ಪ್ರದಾನ ಕಾರ್ಯಕ್ರಮದಲ್ಲಿ ಡಾ. ವಿಜಯಾ ಹಾಗೂ ಶ್ರೀ ಶ್ರೀನಿವಾಸ ಜಿ.ಕಪ್ಪಣ್ಣ ಅವರು ಶ್ರೀ. ವಿ.ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿಯನ್ನು ಹಿರಿಯ ಪತ್ರಕರ್ತ ಶ್ರೀ ಎಚ್.ಎನ್. ಆನಂದ ಅವರಿಗೆ ಪ್ರದಾನ ಮಾಡಿದರು.

ಪ್ರೊ.ಎಲ್.ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿಗೆ ಆಯ್ಕೆಯಾಗಿದ್ದ ಡಾ.ಬಿ.ಎಸ್.ಸುಮಿತ್ರಾಬಾಯಿ ಅವರು ಅನಾರೋಗ್ಯ ನಿಮಿತ್ತ ಈ ಕಾರ್ಯಕ್ರಮದಲ್ಲಿ ಭಾಗವಹಿಸಿರಲಿಲ್ಲ. ಡಾ.ವಿಜಯಾ ಅವರು ಮಾತನಾಡಿ ಪತ್ರಿಕಾ ಕ್ಷೇತ್ರದಲ್ಲಿ ತಮ್ಮ ಹಾಗೂ ಶ್ರೀ ಎಚ್.ಎನ್.ಆನಂದ ಅವರ ಜೊತೆಗಿನ ಬಾಂಧವ್ಯವನ್ನು ಸ್ಮರಿಸಿಕೊಂಡರು. ಅವರ ಕೃತಿಗಳನ್ನು ಮುದ್ರಿಸಿದ ವಿಚಾರ ಹಂಚಿಕೊಂಡರು. ಶ್ರೀ ಎಚ್.ಎನ್.ಆನಂದರವರ ಪತ್ರಿಕಾ ಬರವಣಿಗೆ ಮೊನಚನ್ನು ಉದಾಹರಣೆಗಳ ತುಣುಕುಗಳ ಮೂಲಕ ವಿವರಿಸಿದರು.

ಶ್ರೀ ಎಚ್.ಎನ್.ಆನಂದರ ಸಹಪಾಠಿ ಶ್ರೀ ಶ್ರೀನಿವಾಸ ಜಿ ಕಪ್ಪಣ್ಣನವರು ತಾವಿಬ್ಬರೂ ನ್ಯಾಷನಲ್ ಕಾಲೇಜಿನಲ್ಲಿ ಸಹಪಾಠಿಗಳಾಗಿದ್ದ ಸಂದರ್ಭವನ್ನು ಸ್ಮರಿಸಿದರು. ಡಾ.ಎಚ್.ನರಸಿಂಹಯ್ಯನವರ ಆಪ್ತಬಳಗದಲ್ಲಿ ಗುರುತಿಸಿಕೊಂಡಿದ್ದ ಬಗ್ಗೆ ವಿವರಿಸಿದರು.

ಶ್ರೀ ಎಚ್.ಎನ್.ಆನಂದ ಅವರು ತಾವು ಬೆಳೆದು ಬಂದ ಬಗೆ ಮತ್ತು ತಮ್ಮ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳನ್ನು ಸ್ಮರಿಸಿಕೊಂಡರು. ಪ್ರಶಸ್ತಿ ನೀಡಿದ ಶ್ರೀ ವಿ.ನಾಗರಾಜರಾವ್ ಅವರ ಕುಟುಂಬಕ್ಕೆ ಮತ್ತು ಪ್ರಶಸ್ತಿಗೆ ಆಯ್ಕೆಮಾಡಿದ ಬಿ.ಎಂ.ಶ್ರೀ. ಪ್ರತಿಷ್ಠಾನಕ್ಕೆ ಧನ್ಯವಾದವನ್ನು ಅರ್ಪಿಸಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಬೈರಮಂಗಲ ರಾಮೇಗೌಡ ಪ್ರಾಸ್ತವಿಕವಾಗಿ ಮಾತನಾಡಿದರು.

ಕಾರ್ಯಕ್ರಮದಲ್ಲಿ ಆಯ್ಕೆ ಸಮಿತಿಯ ಡಾ.ಪದ್ಮರಾಜ್ ದಂಡಾವತಿ ಮತ್ತು ಡಾ.ಟಿ.ವೆಂಕಟೇಶ್ ಮೂರ್ತಿಯವರು, ಕಾರ್ಯಕಾರಿ ಸಮಿತಿಯ ಸದಸ್ಯರು ಹಾಗೂ ಇತರ ಗಣ್ಯ ಅತಿಥಿಗಳು ಭಾಗವಹಿಸಿದ್ದರು.

## ಸಂಪಾದಕೀಯ

ಒಂದು ಸಣ್ಣ ಊರಿನ ಶಾಲೆಯಲ್ಲಿ ಪ್ರಾರಂಭಗೊಂಡ ಸಮಸ್ಯೆ ಇಂದು ವಿಶ್ವ ಮಟ್ಟದಲ್ಲಿ ಸುದ್ದಿಯಾಗುತ್ತಿದೆ. ನಮ್ಮ ದೇಶದಲ್ಲಿ ಹಲವಾರು ಜ್ವಲಂತ ಸಮಸ್ಯೆಗಳನ್ನು ಎದುರಿಸುತ್ತಿರುವ ಅಸಂಖ್ಯಾತ ಜನರಿಗೆ ಪರಿಹಾರಗಳನ್ನು ನೀಡುವುದು ಕಷ್ಟವಾಗುತ್ತಿರುವ ಈ ಕಾಲಘಟ್ಟದಲ್ಲಿ ತಲೆತಲಾಂತರದಿಂದ ಒಂದುಗೂಡಿ ಬಾಳುತ್ತಿರುವ ಸಮುದಾಯಗಳ ನಡುವೆ ಉಂಟಾಗಿರುವ ಒಂದು ಸಣ್ಣ ಗೊಂದಲ ಈ ಮಟ್ಟಕ್ಕೆ ತಲುಪಬೇಕಾಗಿತ್ತೇ ಎಂಬ ಸಂದೇಹ ಉಂಟಾಗಿದೆ.

ಅನ್ನ, ನೀರು ಮತ್ತು ಸೂರುಗಳು ಇಲ್ಲದ ಜನರ ಕಷ್ಟಗಳನ್ನು ನಿವಾರಿಸುವತ್ತ ಸುದ್ದಿಗಳನ್ನು ನೀಡಬಹುದಾದ ದಿನಪತ್ರಿಕೆಗಳ ಅಮೂಲ್ಯ ವರದಿಗಳ ಬದಲಾಗಿ ಸಮುದಾಯಗಳ ನಡುವಿನ ಗೊಂದಲದ ವರದಿಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಲಾಗುತ್ತಿದೆ.

ದೇಶದ ಮಟ್ಟದಲ್ಲಿ ನ್ಯಾಯಾಲಯಗಳಲ್ಲಿ ಇತ್ಯರ್ಥಗೊಳ್ಳಲು ದಶಕಗಳಿಂದ ಕಾಯುತ್ತಿರುವ ಕೋಟಿಗಟ್ಟಲೆ ವ್ಯಾಜ್ಯಗಳು ಬಾಕಿ ಇರುವಾಗ, ದೇಶಾದ್ಯಂತ ಜೈಲುಗಳಲ್ಲಿ ಕೊಳೆಯುತ್ತಿರುವ ಲಕ್ಷಾಂತರ ಅಂಡರ್ ಟ್ರಯಲ್ ಕೈದಿಗಳ ಜೀವನ ಹಾಗೂ ಕುಟುಂಬಗಳು ಹಾಳಾಗುತ್ತಿರುವಾಗ ಮತ್ತು ಅಂತಹ ಕೈದಿಗಳನ್ನು ವರ್ಷಾನುಗಟ್ಟಲೆ ಸರ್ಕಾರ ತೆರಿಗೆದಾರರ ಹಣದಿಂದ ನೋಡಿಕೊಳ್ಳಬೇಕಾದ ಪರಿಸ್ಥಿತಿ ಇರುವಾಗ ಸಮುದಾಯಗಳ ನಡುವಿನ ಗೊಂದಲ ನಿವಾರಣೆಗೆ ಆದ್ಯತೆ ನೀಡುವಂತಹ ಸನ್ನಿವೇಶ ಬಂದೊದಗಿದೆ. ಸರ್ಕಾರಗಳು ತಮ್ಮ ಮೇಲಿರುವ ಪ್ರಮುಖ ಜವಾಬ್ದಾರಿಗಳನ್ನು ನಿಭಾಯಿಸಲು ಕಷ್ಟಪಡುತ್ತಿರುವಾಗ ಬಹಳ ಕಷ್ಟಪಟ್ಟು ಗಳಿಸಿರುವ ಸಂಪನ್ಮೂಲಗಳನ್ನು ಈ ಗೊಂದಲ ನಿವಾರಣೆಗೆ ಬಳಸಬೇಕಾಗಿ ಬಂದಿದೆ.

ಉನ್ನತ ಶಿಕ್ಷಣ ಪಡೆದಿರುವ, ಉನ್ನತ ಹುದ್ದೆಗಳ ಜವಾಬ್ದಾರಿಗಳನ್ನು ಹೊಂದಿರುವ ಬುದ್ಧಿಜೀವಿಗಳು ದೇಶದ ಜನರು ಎದುರಿಸುತ್ತಿರುವ ತೊಂದರೆಗಳನ್ನು ನಿವಾರಿಸಲು ವಿನಿಯೋಗಿಸಬಹುದಾದ ಸಮಯ, ಬುದ್ಧಿ, ಸಂಪನ್ಮೂಲಗಳನ್ನು ಗೊಂದಲ ನಿವಾರಣೆಗೆ ಮೀಸಲಿಡಬೇಕಾಗಿ ಬಂದಿದೆ. ನಮ್ಮ ದೇಶದ ನಾಗರಿಕರು ವೈಯಕ್ತಿಕ ಮಟ್ಟದ ಸಮಸ್ಯೆಗಳನ್ನು ನಿವಾರಿಸುವತ್ತ ಮಾಡಬೇಕಾದ ಚಿಂತನೆ, ಚರ್ಚೆಗಳ ಬದಲಾಗಿ ಈ ಗೊಂದಲದ ವಿವಿಧ ಆಯಾಮಗಳ ಬಗ್ಗೆ ತಮ್ಮ ಅಮೂಲ್ಯ ಸಮಯವನ್ನು ಬಳಸಿಕೊಳ್ಳುತ್ತಿದ್ದಾರೆ.

ಹೀಗೆ ಮೊದಲೇ ಸಂಪನ್ಮೂಲಗಳ ಕೊರತೆಗಳು ದೇಶದ ಪ್ರಗತಿ ಅಡ್ಡಿ ಉಂಟುಮಾಡುತ್ತಿವೆ. ಜೊತೆಗೆ ಸುಲಭವಾಗಿ ಪರಿಹರಿಸಿಕೊಳ್ಳಬಹುದಾದ ಈ ಗೊಂದಲಕ್ಕೆ ನಮ್ಮ ಅಮೂಲ್ಯ ಸಂಪನ್ಮೂಲಗಳು ವ್ಯಯಗೊಳ್ಳುತ್ತಿವೆ. ಈ ಬೆಳವಣಿಗೆ ನಮ್ಮ ದೇಶದ ಪ್ರಗತಿಗೆ ಅಡ್ಡಿ ಉಂಟುಮಾಡುವ ಸಂಭವವಿದೆ.

ಇದರ ಜೊತೆಗೆ ಈಗ ಯುದ್ಧಮಾಡುತ್ತಿರುವ ಎರಡು ದೇಶಗಳು ಭೌಗೋಳಿಕವಾಗಿ ಭಾರತದಿಂದ ಬಹುದೂರದಲ್ಲಿದ್ದರೂ ಈ ಯುದ್ದದ ಪರಿಣಾಮಗಳು ಭಾರತದ ಆರ್ಥಿಕ ಪ್ರಗತಿಗೆ ಅಡ್ಡಿ ಉಂಟುಮಾಡುವ ಚಿಹ್ನೆಗಳು ಕಾಣುತ್ತಿವೆ.

ಇವೆಲ್ಲಕ್ಕೆ ಕೊನೆ ಎಂದು ಮತ್ತು ಈ ಪರಿಸ್ಥಿತಿಯಲ್ಲಿ ನಾವು ಏನು ಮಾಡಬಹುದು ಎಂದು ಚಿಂತನೆ ಮಾಡುವುದು ಒಳಿತಲ್ಲವೇ?

– ಬಿ.ಆರ್. ರವೀಂದ್ರನಾಥ್

## ಹಸ್ತಪ್ರತಿ ವಿಭಾಗ : ಮಾರ್ಚ್ ೨೦೨೨

'ಪುರಾತತ್ವ ಶಾಸ್ತ್ರ ಮತ್ತು ಅದರ ಪೂರಕ ವಿಷಯಗಳು' ಎಂಬ ವಿಷಯಗಳನ್ನೊಳಗೊಂಡ ಒಂದು ದಿನದ ಬಹುಶಿಸ್ತೀಯ ರಾಷ್ಟ್ರೀಯ ವಿಚಾರ ಸಂಕಿರಣವನ್ನು ಚಿಕ್ಕಬಳ್ಳಾಪುರ ಪ್ರಥಮ ದರ್ಜೆ ಕಾಲೇಜು ದಿನಾಂಕ ೫ ಮಾರ್ಚ್ ೨೦೨೨ರಂದು ಆಯೋಜಿಸಿತ್ತು. ಹಸ್ತಪ್ರತಿ ಮತ್ತು ತಾಳೆಗರಿಗಳ ಪ್ರದರ್ಶನಕ್ಕಾಗಿ ಪ್ರತಿಷ್ಠಾನವನ್ನು ಆಹ್ವಾನಿಸಲಾಗಿತ್ತು. ಪ್ರತಿಷ್ಠಾನವು ತಾಮ್ರಪಟವನ್ನು, ತಾಳೆಗರಿಗಳನ್ನು, ಕಡತಗಳನ್ನು ಮತ್ತು ವಿವಿಧ ಹಸ್ತಪ್ರತಿಗಳ ಪ್ರದರ್ಶನವನ್ನು ಏರ್ಪಡಿಸಿತ್ತು. ಪ್ರತಿಷ್ಠಾನದ ಹಸ್ತಪ್ರತಿ ಸಂಯೋಜಕರಾದ ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಪ್ರದರ್ಶನವನ್ನು ಏರ್ಪಡಿಸಿ, ಒಂದು ಪ್ರಾತ್ಯಕ್ಷಿಕೆಯನ್ನು ನೀಡಿ, ಹಸ್ತಪ್ರತಿಗಳ ಸಂರಕ್ಷಣೆಯಲ್ಲಿ ಪ್ರತಿಷ್ಠಾನದ ಪಾತ್ರವನ್ನು ಕುರಿತು ಉಪನ್ಯಾಸ ನೀಡಿದರು. ಶ್ರೀಮತಿ ವರಲಕ್ಷ್ಮಿ ಬಿ.ಕೆ. ಅವರು ಪ್ರದರ್ಶನಕ್ಕೆ ಬೇಕಾದ ಸಿದ್ಧತೆ ಮತ್ತು ಸಹಾಯ ನೀಡಿದರು. ಈ ವಿಚಾರ ಸಂಕಿರಣದ ಸಂಘಟನಾ ಕಾರ್ಯದರ್ಶಿಗಳಾದ ಇತಿಹಾಸ ಪ್ರಾಧ್ಯಾಪಕ ಡಾ. ಷಫಿ ಅಹಮದ್ ಅವರು ಪ್ರದರ್ಶನಕ್ಕೆ ಬೇಕಾದ ವ್ಯವಸ್ಥೆಗಳನ್ನು ಅಚ್ಚುಕಟ್ಟಾಗಿ ನೆರವೇರಿಸಿದ್ದರು.

### ೧೨-೩-೨೦೨೨ ರಂದು ಬೆಂಗಳೂರು, ಜಯನಗರ, ವಿಜಯ ಕಾಲೇಜಿನ ವಿದ್ಯಾರ್ಥಿಗಳು ಪ್ರತಿಷ್ಠಾನಕ್ಕೆ ಶೈಕ್ಷಣಿಕ ಭೇಟಿ ನೀಡಿದ್ದರು.



ಜಯನಗರ ವಿಜಯ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಡಾ.ಎಸ್.ಎಲ್. ಮಂಜುನಾಥ್ ನೇತೃತ್ವದಲ್ಲಿ ಅವರ ಸಹೋದ್ಯೋಗಿಗಳಾದ ಡಾ. ರಾಮಮೂರ್ತಿ, ಡಾ. ಲಕ್ಷ್ಮೀ ಪಿ. ಮತ್ತು ಶ್ರೀಮತಿ ರೂಪ, ಸಹಪ್ರಾಧ್ಯಾಪಕರು ಮತ್ತು ಹನ್ನೆರಡು ಐಚ್ಛಿಕ ಕನ್ನಡ ವಿದ್ಯಾರ್ಥಿಗಳೊಂದಿಗೆ ದಿನಾಂಕ ೧೨ನೇ ಮಾರ್ಚ್ ೨೦೨೨ರಂದು ಪ್ರತಿಷ್ಠಾನದ ಹಸ್ತಪ್ರತಿ ವಿಭಾಗಕ್ಕೆ ಭೇಟಿ ನೀಡಿದ್ದರು. ಹಸ್ತಪ್ರತಿ ಸಂಯೋಜಕರಾದ ಶ್ರೀ ಬಿ.ಎಸ್.ಗುರುಪ್ರಸಾದ್ ಅವರು ಹಸ್ತಪ್ರತಿ ಸಂಗ್ರಹಾಲಯದ ಉಗಮ, ಬೆಳೆದುಬಂದ ದಾರಿ, ವಿಭಾಗದ ಕಾರ್ಯ ಚಟುವಟಿಕೆಗಳು ಮತ್ತು ಹಸ್ತಪ್ರತಿ ವಿಭಾಗದ ಪ್ರಕಟಣೆಗಳ ಬಗ್ಗೆ ವಿದ್ಯಾರ್ಥಿಗಳಿಗೆ ಮಾಹಿತಿ ನೀಡಿದರು. ವಿವಿಧ ಲಿಪಿಗಳ ಮತ್ತು ವಿವಿಧ ಭಾಷೆಗಳ ತಾಳೆಗರಿ ಗ್ರಂಥಗಳ ಬಗ್ಗೆ ಪ್ರಾತ್ಯಕ್ಷಿಕೆಯನ್ನು ಆಯೋಜಿಸಲಾಗಿತ್ತು.

# ಏಪ್ರಿಲ್ ೨೦೨೨ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

ದಿನಾಂಕ : ೦೯-೦೪-೨೦೨೨. ಶನಿವಾರ    ಸಂಜೆ : ೦೫-೦೦
ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ
ದಿ|| ತಿಮ್ಮಪ್ಪದಾಸರ ಕೀರ್ತನೆಗಳ ಕೃತಿ : 'ಅರ್ಚನ' ಲೋಕಾರ್ಪಣೆ ಕಾರ್ಯಕ್ರಮ
ಧ್ವನಿಮುದ್ರಿಕೆ ಬಿಡುಗಡೆ
ಸಮನ್ವಯ ಸಂಗೀತ ಕೇಂದ್ರದ ತಿಮ್ಮಪ್ಪದಾಸರ ಕೀರ್ತನೆಗಳ ಹಾಡುಗಾರಿಕೆ

ದಿನಾಂಕ : ೧೬-೦೪-೨೦೨೨ ಶನಿವಾರ ಸಂಜೆ : ೪-೩೦ ಗಂಟೆಗೆ
ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿ.ಎಂ.ಶ್ರೀ. ಪ್ರತಿಷ್ಠಾನ
ಶ್ರೀ ಸಿ.ಕೆ.ನಾಗರಾಜರಾವ್, ಶ್ರೀ ಕೆ.ಪಿ.ರಾವ್, ಶ್ರೀ ಕೊರಟಿ ಶ್ರೀನಿವಾಸರಾವ್ ದತ್ತಿ ಉಪನ್ಯಾಸ ಕಾರ್ಯಕ್ರಮ
ವಿಷಯ : ಕೊರಟಿ ಶ್ರೀನಿವಾಸರಾವ್ ಅವರ 'ಐತಿಹಾಸಿಕ ಸಣ್ಣ ಕಥೆಗಳು'
ಸಂಪನ್ಮೂಲ ವ್ಯಕ್ತಿ : ಡಾ. ಎಲ್.ರಾಜೇಶ್
ಸಾಹಿತಿಗಳು ಮತ್ತು ಸಹ ಪ್ರಾಧ್ಯಾಪಕರು, ವಿ.ವಿ.ಪುರಂ ಸಂಜೆ ಕಾಲೇಜು, ಬೆಂಗಳೂರು

## ಬಿ.ಎಂ.ಶ್ರೀ. ಪ್ರತಿಷ್ಠಾನಕ್ಕೆ ಪ್ರೊ. ಎಂ.ವಿ.ಸೀ. ಅವರ ಮರಿಮಗ ಚಿ. ಸಾಹಿಲ್ ಪ್ರಸಾದ್ ಭೇಟಿ

ಅಮೆರಿಕಾದ ಮೇರಿಲ್ಯಾಂಡ್ ರಾಜ್ಯದ, ಎಲಿಕಾಟ್‌ನ ಆರನೇ ತರಗತಿಯ ವಿದ್ಯಾರ್ಥಿ ಚಿ. ಸಾಹಿಲ್ ಪ್ರಸಾದ್. ಪ್ರೊ. ಎಂ.ವಿ.ಸೀ. ಅವರ ಮರಿಮಗ. ಈತ ತನ್ನ ಪೋಷಕರು ಮತ್ತು ಅಜ್ಜ ಶ್ರೀ ಎಂ.ಎಸ್. ರಾಮಪ್ರಸಾದ್ ಅವರೊಂದಿಗೆ ಡಿಸೆಂಬರ್ ೨೦೨೧ರಲ್ಲಿ ಅಚಾನಕ್ಕಾಗಿ ಪ್ರತಿಷ್ಠಾನಕ್ಕೆ ಮತ್ತು ಹಸ್ತಪ್ರತಿ ವಿಭಾಗ-ಕ್ಕೆ ಭೇಟಿನೀಡಿ, ವಿಭಾಗದ ಕಾರ್ಯಚಟುವಟಿಕೆಗಳ ಬಗ್ಗೆ ಮಾಹಿತಿ ಪಡೆದು ನಂತರ ಅಮೇರಿಕಾಕ್ಕೆ ಹಿಂದಿರುಗಿ, ಇ-ಮೇಲ್ ಮೂಲಕ ತನ್ನ ಅನಿಸಿಕೆಯನ್ನು ಈ ರೀತಿ ವ್ಯಕ್ತಪಡಿಸಿದ್ದಾನೆ. ಅವನ ಈ ಕಿರು ಲೇಖನವನ್ನು ನಿಮಗಾಗಿ ಇಲ್ಲಿ ಹಾಕಿದೆ.

## BM Sri Pratishtana: The Dedication of Mr. Guru Prasad, the Manuscriptologist

Large brown shelves, crinkly palm leaves in red cloth covering, and dusty manuscripts bound in a fragile covers: this is the office of Mr. Guru Prasad, the manuscripologist at the BM Sri Pratishtana, an organization inspired by famous the Kannada poet of the region, Mr. MV Seetharamaiah (also my great grandfather) and dedicated to preserving Kannada literature and manuscripts from ancient India.

Preserving centuries old manuscripts isn't an easy job. After all, a single collision against any object would shatter them. Despite this, Mr. Guru Prasad still continues his passionate work and he has preserved hundreds of these fragile, but priceless documents. The steps he takes in the preservation of ancient treasures are treating the manuscripts by wrapping them in red cloth to protect them from the sun and washing them in citronella oil to keep the ink from wearing off. Even after all of these tedious efforts, the cleaning only lasts for a few years. In addition, he also copies the documents with rigorous and careful scanning machines to post them online so many curious citizens can check them out. Mr. Guru Prasad does all of this dedicated work as a voluntary service.

The reward that Mr. Guru Prasad may get for all his efforts is happiness and the feeling of triumph that he has saved such beautiful pieces of literature so that future generations can benefit from all the knowledge that he preserved.

Sahil Prasad, December 2021



**My grandfather, myself, and Mr. Guruprasad.**



**With my great grand father**

# ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೨೫-೦೨-೨೦೨೨

## ಪಂಡಿತ್ ಓ. ಆರ್. ರಾಮಣ್ಣ ಮತ್ತು ಶ್ರೀಮತಿ ಪುಟ್ಟಮ್ಮ ದತ್ತಿ ಉಪನ್ಯಾಸ

### ವಿಷಯ- 'ಹರಿಶ್ಚಂದ್ರ ಕಾವ್ಯದಲ್ಲಿ ಹೊಲೆತನದ ವಿಚಾರಗಳು'

### ಉಪನ್ಯಾಸಕರು - ಪ್ರೊ. ಡಿ. ಅಂಜನಪ್ಪ




ಪಂಡಿತ್ ಓ.ಆರ್. ರಾಮಣ್ಣ ಮತ್ತು ಶ್ರೀಮತಿ ಪುಟ್ಟಮ್ಮ ದತ್ತಿ ಉಪನ್ಯಾಸವನ್ನು ಗೂಗಲ್ ಜಾಲಗೋಷ್ಠಿಯ ಮೂಲಕ ನಡೆಸಲಾಯಿತು. ಡಾ.ಆರ್.ಲಕ್ಷ್ಮೀನಾರಾಯಣ ಅವರು ತಮ್ಮ ತಂದೆ ತಾಯಿಯ ಹೆಸರಿನಲ್ಲಿ ಈ ದತ್ತಿಯನ್ನು ಸ್ಥಾಪಿಸಿದ್ದಾರೆ.

'ಹರಿಶ್ಚಂದ್ರ ಕಾವ್ಯದಲ್ಲಿ ಹೊಲೆತನದ ವಿಚಾರಗಳು' ಎಂಬ ವಿಷಯವನ್ನು ಕುರಿತು ಚಳ್ಳಕೆರೆಯ ಸರ್ಕಾರಿ ಕಾಲೇಜಿನ ಸ್ನಾತಕೋತ್ತರ ಅಧ್ಯಯನ ವಿಭಾಗದ ಪ್ರೊ.ಡಿ. ಅಂಜನಪ್ಪ ಚಳ್ಳಕೆರೆ ಅವರು ಜಾಲತಾಣದ ಮೂಲಕ ನಡೆಸಿಕೊಟ್ಟರು.

ಹರಿಶ್ಚಂದ್ರ ಕಾವ್ಯದಲ್ಲಿ ಹೊಲೆತನವನ್ನು ರಾಘವಾಂಕನು ವಿವಿಧ ಆಯಾಮಗಳಲ್ಲಿ ಚಿತ್ರಿಸಿದ್ದಾನೆ. ಹೊಲೆತನವು ಹುಟ್ಟಿನ ಮತ್ತು ಆಲೋಚನೆಯ ಭಾಗವಾಗಿದೆ.

ನಾಲ್ಕು ಪ್ರಸಂಗ ಮತ್ತು ಆಯಾಮಗಳ ಮೂಲಕ ಚಿತ್ರಿಸಿರುವುದನ್ನು ಪ್ರೊ. ಅಂಜನಪ್ಪನವರು ಹರಿಶ್ಚಂದ್ರ-ಹೊಲತಿಯರ ಪ್ರಸಂಗ, ಹರಿಶ್ಚಂದ್ರ-ವೀರಬಾಹುಕರ ಪ್ರಸಂಗ, ಹರಿಶ್ಚಂದ್ರ- ಚಂದ್ರಮತಿಯರ ಪ್ರಸಂಗ ಮತ್ತು ಶಿವಪ್ರತ್ಯಕ್ಷವಾದಾಗ ನಡೆಯುವ ಘಟನೆಗಳ ಮೂಲಕ ವಿವರಿಸಿದರು.

ರಾಘವಾಂಕನ ಕಲಾತ್ಮಕ ದೃಷ್ಟಿಕೋನ ಮತ್ತು ವೈಚಾರಿಕ ದೃಷ್ಟಿಕೋನದ ಮೂಲಕ ಹೊಲೆತನಗಳ ವಿಚಾರಗಳನ್ನು ವಿಮರ್ಶಾತ್ಮಕವಾಗಿ ಕೇಳುಗರ ಒಳಗಣ್ಣು ತೆರೆಯುವಂತೆ ವಿವರಿಸಿದರು.

ಕಾರ್ಯಕ್ರಮದ ಆರಂಭದಲ್ಲಿ ಡಾ.ಬೈರಮಂಗಲ ರಾಮೇಗೌಡ ಅವರು ಉಪನ್ಯಾಸಕರನ್ನು ಹಾಗೂ ಜಾಲಕೊಂಡಿಯ ಮೂಲಕ ಹಾಜರಾದ ಕೇಳುಗರನ್ನು ಸ್ವಾಗತಿಸಿ ದತ್ತಿಯನ್ನು ಸ್ಥಾಪಿಸಿರುವ ನಿಕಟ ಪೂರ್ವ ಅಧ್ಯಕ್ಷರಾಗಿದ್ದ ಡಾ. ಆರ್. ಲಕ್ಷೀನಾರಾಯಣ ಮತ್ತು ಅವರ ತಂದೆ-ತಾಯಿಯರ ಪರಿಚಯ ಹಾಗೂ ಸಂಪನ್ಮೂಲ ವ್ಯಕ್ತಿ ಪ್ರೊ. ಅಂಜನಪ್ಪ ಅವರ ಪರಿಚಯ ಮಾಡಿ ಪ್ರಾಸ್ತಾವಿಕವಾಗಿ ಮಾತನಾಡಿದರು. ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ಎಲ್ಲರಿಗೂ ಡಾ.ಬಿ.ಸಿ.ರಾಜಕುಮಾರ್ ಅವರು ವಂದಿಸಿದರು.

೧೩-೦೩-೨೦೨೨

## ಕಣಕಟ್ಟೆ ಕೃಷ್ಣಮೂರ್ತಿರಾವ್ ದತ್ತಿ

### ಶಾಸ್ತ್ರೀಯ ಸಂಗೀತ ಕಾರ್ಯಕ್ರಮ

**ಹಾಡಿದವರು -ಶ್ರೀಮತಿ ಕೃತಿಕ ಶ್ರೀನಿವಾಸ**

**ಪಿಟೀಲು- ಶ್ರೀ ಕೃತಿಕ್ ಕೌಶಿಕ್**

**ಮೃದಂಗ- ಶ್ರೀ ಪ್ರಜ್ವಲ್ ಭಾರದ್ವಾಜ್**



ಈ ದತ್ತಿ ಕಾರ್ಯಕ್ರಮದ ಅಡಿಯಲ್ಲಿ ಶ್ರೀಮತಿ ಕೃತಿಕ ಶ್ರೀನಿವಾಸನ್ ಮತ್ತು ತಂಡದವರು ಶಾಸ್ತ್ರೀಯ ಸಂಗೀತ ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಈ ಕಾರ್ಯಕ್ರಮದಲ್ಲಿ ಈ ಕೆಳಕಂಡ ಸಂಗೀತ ಕೃತಿಗಳ ಗಾಯನ ನಡೆಸಿದರು.

೧. ಸಾಮಗಾನ ಲೋಲನೆ - ಹಿಂದೋಳ ರಾಗ-ಆದಿ ತಾಳ, ಸಂಯೋಜನೆ : ಪಾಪನಾಶಂ ಶಿವಂ
೨. ಜ್ಞಾನಮೊಸಗ ರಾಗ-ಪೂರ್ವಿಕಲ್ಯಾಣಿ-ರೂಪಕ ತಾಳ, ಸಂಯೋಜನೆ : ತ್ಯಾಗರಾಜ
೩. ಮೀವಲ್ಲ ಗುಣದೋಷ-ಕಪಿ-ಖಂಡಚಾಪು ತಾಳ, ಸಂಯೋಜನೆ : ತ್ಯಾಗರಾಜ
೪. ಭಜರೆ ಮಾನಸ-ಅಭೇರಿ ರಾಗ-ಆದಿ ತಾಳ, ಸಂಯೋಜನೆ : ಮೈಸೂರು ವಾಸುದೇವಾಚಾರ್ಯ
೫. ಮನವೇ ಮಂತ್ರಾಲಯ - ರಾಗಮಾಲಿಕೆ - ಆದಿ ತಾಳ-ಪದ್ಮಚರಣ್, ಸಂಯೋಜನೆ : ಮಂಗಳ

ಕಾರ್ಯಕ್ರಮದ ಆರಂಭದಲ್ಲಿ ಪ್ರತಿಷ್ಠಾನದ ಸದಸ್ಯರಾದ ಡಾ.ನಳಿನಿ ವೆಂಕಟೇಶ್ ಅವರು ದತ್ತಿ ದಾನಿಗಳ ಪರಿಚಯ ಮತ್ತು ಶಾಸ್ತ್ರೀಯ ಸಂಗೀತ ಕಲಾವಿದೆ ಶ್ರೀಮತಿ ಕೃತಿಕ ಶ್ರೀನಿವಾಸನ್ ಮತ್ತು ತಂಡದವರನ್ನು ಪರಿಚಯ ಮಾಡಿಕೊಟ್ಟರು.

ಡಾ.ಬೈರಮಂಗಲ ರಾಮೇಗೌಡ ಅವರು ದತ್ತಿ ದಾನಿಗಳು ಮತ್ತು ಅವರ ಸಂಗೀತ ಸಾಧನೆ ಕುರಿತು ಮಾತನಾಡಿದರು. ಕಾರ್ಯಕ್ರಮವನ್ನು ನಡೆಸಿಕೊಟ್ಟ ಶ್ರೀಮತಿ ಕೃತಿಕ ಶ್ರೀನಿವಾಸನ್ ಮತ್ತು ತಂಡದವರ ಸಾಧನೆಯನ್ನು ಪ್ರಶಂಸೆ ಮಾಡಿದರು. ಕಾರ್ಯಕ್ರಮದ ಕೊನೆಯಲ್ಲಿ ಡಾ.ನಳಿನಿ ವೆಂಕಟೇಶ್ ಅವರು ವಂದಿಸಿದರು.



# ಎಂ.ವಿ.ಸೀ.
# ಬದುಕು ಬರಹ – ೨೫

**ಹಿಂದಿನ ಸಂಚಿಕೆಯಿಂದ**

ಭಾವಗೀತೆಯ ಪ್ರಕಾರದಲ್ಲಿ ಹೇಗೆಯೋ ಹಾಗೆಯೇ ನವೋದಯದ ಸಣ್ಣಕಥೆಯಲ್ಲಿಯೂ ಭಾವುಕತೆಗೆ ಪ್ರಾಧಾನ್ಯ. ಜೊತೆಗೆ ಆದರ್ಶ ಬದುಕಿನ ಪದರುಗಳನ್ನು ಎತ್ತಿ ತೋರುವುದೂ ಸಾಹಿತ್ಯದ ಉದ್ದೇಶವೆಂಬ ಭಾವನೆಯಿತ್ತು. ತಮ್ಮ ಕೃತಿಗಳು ಸಾಮಾನ್ಯವಾಗಿ ಆ ಕಾಲದಲ್ಲಿ ಮುಖ್ಯವೆಂದು ಭಾವಿಸಲಾಗಿದ್ದ ಜೀವನ ಮೌಲ್ಯಗಳ ಪೃಥಕ್ಕರಣೆ ಮಾಡಬೇಕೆಂಬುದು ಲೇಖಕರ ಗುರಿಯಾಗಿತ್ತು. ಕರುಣೆ, ಔದಾರ್ಯ, ಶೀಲರಕ್ಷಣೆ, ಸಂಸ್ಕೃತಿಯ ಬಗೆಗಿನ ಅಭಿಮಾನ, ಧಾರ್ಮಿಕ ಚೌಕಟ್ಟಿನೊಳಗಿನ ಬದುಕು – ಇಂಥವು ಆಗಿನ ಮೌಲ್ಯಗಳು. ಹೀಗಾಗಿ ನವೋದಯದ ಕತೆಗಳಲ್ಲಿ ಹೊರಸಂಗತಿಗಳ ಮೂಲಕವಾದ ನಿರೂಪಣೆಗೆ ಹೆಚ್ಚು ಪ್ರಾಧಾನ್ಯ ದೊರೆಯಿತೇ ವಿನಾ ಆಂತರಂಗಿಕ ತೊಳಲಾಟಕ್ಕಲ್ಲ. ಆದ್ದರಿಂದಲೇ ಬದುಕಿನ ದುರಂತಗಳನ್ನು ನಿರೂಪಿಸುತ್ತ ಅವುಗಳನ್ನು ಭರಿಸುವ ಸಾಮರ್ಥ್ಯ ಬರುವುದು ಶುಚಿ ಜೀವನದಿಂದ ಎಂಬ ನಂಬಿಕೆಯನ್ನು ಬಹುಪಾಲು ಲೇಖಕರ ಕತೆಗಳು ಧ್ವನಿಸುವುದು. ನಾವು ಗಮನಿಸಿದ ಮುಖ್ಯ ಕತೆಗಾರರೆಲ್ಲ ಮೇಲುವರ್ಣದ ಮಧ್ಯಮವರ್ಗದ ಕತೆಗಾರರು.

ಹಾಗಾಗಿ ಅವರ ಆದರ್ಶಗಳು ಈ ವರ್ಗವರ್ಣಗಳಿಗೆ ಸೀಮಿತವಾದವು. ಪಾಶ್ಚಾತ್ಯ ಪ್ರಭಾವ ನಮ್ಮ ಲೇಖಕರಲ್ಲಿ ಉದಾರವಾದಿತ್ವವನ್ನು ಉಂಟುಮಾಡಿತೆಂಬುದು ನಿಜ, ಹೀಗಾಗಿ ಅವರ ಕೃತಿಗಳು ಕೆಳವರ್ಗದ ಜನರ ಬದುಕಿನ ಉದಾತ್ತತೆ, ಹಿರಿತನಗಳನ್ನೂ ಗುರುತಿಸಿ ಗೌರವಿಸುವುದಕ್ಕೆ ಸೀಮಿತವಾಯಿತು.

ಎಲ್. ಎಸ್. ಶೇಷಗಿರಿ ರಾಯರು ಈ ಎಲ್ಲವನ್ನೂ ಸೇರಿಸಿ 'ಸಜ್ಜನಿಕೆಯ ದರ್ಶನ', ಅಂದರೆ 'ಮನುಷ್ಯನ ಒಳ್ಳೆಯತನದ ಸಾಧ್ಯತೆ' ಎಂದು ಹೇಳುವಂತೆ ತೋರುತ್ತದೆ. ಅವರ ಬಹುತೇಕ ಕತೆಗಳ ವಸ್ತು ಮಧ್ಯಮವರ್ಗದ ಪಾತ್ರಗಳ ಮೂಲಕ ಅಥವಾ ಮಧ್ಯಮವರ್ಗದ ವ್ಯಕ್ತಿಗಳ ದೃಷ್ಟಿಯ ಮೂಲಕ ಬದುಕಿನ ಅನ್ವೇಷಣೆ. ಅವರ ದುಃಖದುಮ್ಮಾನಗಳು, ಏಳುಬೀಳುಗಳು, ರೀತಿನೀತಿಗಳು, ಕಟ್ಟು–ಕಟ್ಟಳೆಗಳು, ನೀತಿ–ನಂಬಿಕೆಗಳು – ಇಂಥವುಗಳ ಚಿತ್ರಣದ ಮೂಲಕ ಜೀವನವನ್ನು ಕಾಣುವುದು. ಮಧ್ಯಮವರ್ಗದ ವ್ಯಕ್ತಿಗಳೇ ಈ ಶೋಧನೆಯ ಸಾಧನಗಳು.

ಎಂವಿಸೀ ಅವರ ಕತೆಗಳಲ್ಲಿ ತಾತ್ವಿಕ ಅನ್ವೇಷಣೆಗಿಂತ ವ್ಯಕ್ತಿಗಳ ನಡವಳಿಕೆಯ ಚಿತ್ರಣ ಪ್ರಮುಖವಾಗುತ್ತದೆ. ಅವರ ಕತೆಗಳಲ್ಲಿ ಒಳಿತು–ಕೆಡುಕುಗಳ ಮುಖಾಮುಖಿ ಕಡಿಮೆ, ಇಲ್ಲವೇ ಇಲ್ಲ ಎನ್ನಬಹುದು; ಹಾಗೆಯೇ ಒಳತೋಟಿಗಳೂ. ಮನುಷ್ಯನ ಮೂಲ ಮನೋಭಾವ ಒಳ್ಳೆಯತನ ಎಂದು ಕತೆಗಾರರು ಪ್ರತಿಪಾದಿಸದಿದ್ದರೂ, ಒಳ್ಳೆಯತನದಿಂದಾಗಿ ಬದುಕು ಎಷ್ಟು ಹಸನಾಗಬಲ್ಲುದು ಎಂದು ತೋರಿಸುವುದು ಅವರ ಉದ್ದೇಶವಿದ್ದಂತೆ ತೋರುತ್ತದೆ. ಒಳ್ಳೆಯತನ ಎಲ್ಲಿದೆ, ಯಾವ ರೀತಿಯ ವರ್ಗದ ಜನಗಳಲ್ಲಿದೆ ಎಂದು ಹೇಳಲಾಗದು; ಹಾಗೆಯೇ ಕೆಡುಕೂ. ಅವರಿಗೆ ಕೆಡುಕು ತನ್ನ ತೀವ್ರತೆಯಲ್ಲಿ ಎದುರಾಗುವುದಿಲ್ಲ, ಅವರ ಕಣ್ಣಿಗೆ ಬೀಳುವ ಒಳ್ಳೆಯತನಕ್ಕೆ ಇಂಥದೇ ಜಾಗ ಎಂಬುದಿಲ್ಲ, ಮಧ್ಯಮವರ್ಗದ ವ್ಯಕ್ತಿಗಳಲ್ಲಿ ಹೇಗೆಯೋ 'ಕೆಳ'ವರ್ಗದವರಲ್ಲಿಯೂ ಒಳಿತು ಇದೆ ಎಂಬುದನ್ನು ಲೇಖಕರ ಕಣ್ಣು ಗುರುತಿಸುತ್ತದೆ.

ಹೀಗಾಗಿ ವಿದ್ಯೆ ಎಷ್ಟರಮಟ್ಟಿಗೆ ಮನುಷ್ಯನನ್ನು ಒಳ್ಳೆಯವನನ್ನಾಗಿ ರೂಪಿಸಬಲ್ಲುದು ಎಂಬ ಜಿಜ್ಞಾಸೆಯೇನೂ ಕಾಣದು. ಆದರೆ ಒಳ್ಳೆಯತನಕ್ಕೆ ವಿದ್ಯೆಯೇ ಕಾರಣವಲ್ಲ ಎಂಬ ತಿಳಿವಳಿಕೆಯಿದೆ. ಯಾ–ಕೆಂದರೆ, 'ಪೆಪ್ಪರಮೆಂಟು', 'ಬಾಚಿ ತಬ್ಬಿಕೊಂಡಳು', 'ಹೆತ್ತವರ ಪುಣ್ಯ' ಮುಂತಾದ ಕತೆಗಳಲ್ಲಿ ನಿರಕ್ಷರರಲ್ಲಿನ ಉದಾತ್ತತೆಯ ದರ್ಶನವಿದೆ. 'ನೂರ ನಲವತ್ತೆರಡು' ಎಂಬ ಕತೆಯ ನಿರೂಪಕ ನಿತ್ಯರೋಗಿ, ಎಲ್ಲ ಋತುಗಳಲ್ಲೂ ಯಾವುದಾದರೊಂದು ಕಾಯಿಲೆ ಅವನನ್ನು ಬಳಲಿಸುತ್ತದೆ. ಅದರಲ್ಲೂ ಮಳೆಗಾಲ (ಇದು ಸ್ವವಿಷಯವೂ ಆಗಿದೆ!). ಅಂಥ ಕಾಲದಲ್ಲಿ ಒಮ್ಮೆ ಆತ ಪೇಟೆಗೆ ಹೋಗುವ ತುರ್ತು. ಬಸ್ಸಿಗಾಗಿ ಕಾದರೆ ಬಸ್ಸು ಬರುವುದಿಲ್ಲ. ಹೀಗಾಗಿ ಜಟಕಗಾಡಿಯವನೊಬ್ಬನನ್ನು ಆಶ್ರಯಿಸುತ್ತಾನೆ. ಹೋಗಬೇಕಾದ ಜಾಗ ಸೇರಿದಾಗ ಗಾಡಿಯಿಂದ ಕೆಳಗಿಳಿದು ನೋಡಿಕೊಂಡರೆ ಕೋಟಿನ ಜೇಬಿನಲ್ಲಿ ಪರ್ಸೇ ಇಲ್ಲ! ಎಂಥ ಮುಜುಗರದ ಪರಿಸ್ಥಿತಿ! ಮನೆಯಿಂದ ದೂರ ಬಂದಾಗಿದೆ, ಯಾರೂ ಗುರುತಿನವರು ಕಣ್ಣಿಗೆ ಕಾಣಿಸುತ್ತಿಲ್ಲ.

ಹೀಗಾಗಿ ಅನಿವಾರ್ಯವಾಗಿ ಗಾಡಿಯವನಿಗೆ ಪರಿಸ್ಥಿತಿ ವಿವರಿಸಿ, ತನ್ನ ಬಳಿಯ ಯಾವ ವಸ್ತುವನ್ನು ಬೇಕಾದರೂ ತೆಗೆದುಕೊಳ್ಳಬಹುದು, ಅಥವಾ ಮತ್ತೆ ಮನೆಗೆ ಬಿಟ್ಟರೆ ಎರಡೂ ಕಡೆಯ ಚಾರ್ಜನ್ನು ಕೊಡುವುದಾಗಿ ಭರವಸೆ. ಹಾಗೆ ವಾಪಸಾದರೆ 'ಕೆಲಸದ ಗತಿಯೇನು?' ಎಂದು ಗಾಡಿಯವನ ಪ್ರಶ್ನೆ.

ಅದು 'ಹಾಳಾದರೆ ಹಾಳಾಗಲಿ' ಎಂಬುದು ನಿರೂಪಕನ ಉತ್ತರ. ಆದರೆ ಆ ಜಟಕಾ ಸಾಬಿ ಹಣವಿಲ್ಲದಿದ್ದರೆ ಪರವಾಯಿಲ್ಲ ಎನ್ನುತ್ತಾನೆ, ಕೆಲಸದ ಮೇಲೆ ಹೋಗಿ ಎನ್ನುತ್ತಾನೆ. ನಿರೂಪಕ ಕೊನೆಗೆ ಕೊಡಬೇಕಾದ ಹಣವನ್ನು ತಲುಪಿಸಲು ಗಾಡಿ ಸಾಮಾನ್ಯವಾಗಿ ನಿಲ್ಲುವ ಜಾಗ ಯಾವುದೆಂದು ಕೇಳುತ್ತಾನೆ. ತಾನು ನಿಲ್ಲಬಹುದಾದ ಜಾಗಗಳನ್ನು ಹೇಳಿ ಆತ, ಎಲ್ಲೂ ಕಾಣದಿದ್ದರೆ ತನ್ನ ಗಾಡಿಯ ನಂಬರ್ ನೂರನಲವತ್ತೆರಡರ ಹೆಸರಲ್ಲಿ ಯಾವುದಾದರೂ ದೇವರಿಗೆ ಹಣ್ಣುಕಾಯಿ ಮಾಡಿಸಿಬಿಡಿ ಎನ್ನುತ್ತಾನೆ. ಮುಂದೆ ಒಂದು ದಿನ ಆ ಸಂಖ್ಯೆಯ ಕುದುರೆ ಗಾಡಿಯನ್ನು ಕಂಡು ಕೊಡಬೇಕಾದ ಬಾಡಿಗೆ ಕೊಡಹೋದರೆ ಅದರ ಯುವಕನಾದ ಚಾಲಕ ಹಣ ತೆಗೆದುಕೊಳ್ಳಲಿಲ್ಲ. ತಾನು ಹಣವಿಲ್ಲದೆ ಬಂದಾಗ ಗಾಡಿ ಚಾಲನೆ ಮಾಡಿದವನು ಇವನೋ ಇವನ ತಂದೆಯೋ ಎಂಬ ಅನುಮಾನ. ಹೀಗಾಗಿ ಗಾಡಿಗೆ ತಾನು ಹಣ ಕೊಡಬೇಕಾಗಿದ್ದದ್ದು, ಅದನ್ನು ಚಾಲಿಸಿದವನು ಯಾರಾದರೂ ಆಗಿರಲಿ, ಹೀಗಾಗಿ ಎರಡಾಣೆ ಬಾಡಿಗೆ ಕೊಟ್ಟು ಕುದುರೆಗೆ ಹುಲ್ಲು ಕೊಂಡು ಹಾಕು ಎಂದು ಹಣ ನೀಡುತ್ತಾರೆ.

ಇಲ್ಲಿನ ಒಳ್ಳೆಯತನ, ಔದಾರ್ಯಗಳು ಕೆಳವರ್ಗದವರಲ್ಲಿ ಮಾತ್ರವಲ್ಲ, ಅನ್ಯ ಧರ್ಮೀಯನಲ್ಲೂ ಕಾಣಿಸಿಕೊಳ್ಳುವುದು ಮಾನವೀಯತೆ ಎಲ್ಲೂ ಕಾಣಬಹುದು ಎಂಬ ನಂಬಿಕೆಯನ್ನು ಸೂಸುತ್ತದೆ. (ಸ್ವಲ್ಪ ಮಟ್ಟಿಗೆ ಈ ಕತೆ ಭಾರತೀಸುತರ 'ಮೋಚಿ'ಯನ್ನು ನೆನಪಿಸುತ್ತದೆ).

**ಮುಂದುವರೆಯುವುದು**

## ಬಿಎಂಶ್ರೀ ಪ್ರತಿಷ್ಠಾನ ನಡೆದು ಬಂದ ದಾರಿ-೪

ಬಿ.ಆರ್. ರವೀಂದ್ರನಾಥ

ಹಿಂದಿನ ಸಂಚಿಕೆಯಿಂದ

## ಪ್ರತಿಷ್ಠಾನವನ್ನು ಕಟ್ಟಿ ಬೆಳೆಸಿದವರು-೪

### ಪ್ರೊ. ಚಿ. ನ. ಮಂಗಳಾ

ಏಪ್ರಿಲ್ ೧೦, ೧೯೩೮ – ಮೇ ೩೦, ೧೯೯೭



ಚಿ. ನ. ಮಂಗಳಾ ಅವರು ಕನ್ನಡದ ಮೊದಲ ಮಹಿಳಾ ಪತ್ರಕರ್ತೆ, ಸಾಹಿತಿ, ಪ್ರಕಾಶಕಿ, ತಿರುಮಲಾಂಬ ಅವರ ನೆನಪಿಗಾಗಿ ಶಾಶ್ವತಿ ಸಂಸ್ಥೆಯನ್ನು ಸ್ಥಾಪಿಸಿದರು.

ಖ್ಯಾತ ಶಿಕ್ಷಣ ತಜ್ಞೆ, ಸ್ತ್ರೀವಾದಿ ಚಿಂತಕರೂ ಆಗಿದ್ದ ಚಿ.ನ. ಮಂಗಳಾ ಅವರು ಏಪ್ರಿಲ್ ೧೦, ೧೯೩೮ರ ವರ್ಷದಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ಪ್ರಾಥಮಿಕ ವಿದ್ಯಾಭ್ಯಾಸವನ್ನು ಬೆಂಗಳೂರಿನಲ್ಲಿ ಪೂರೈಸಿದ ಮಂಗಳಾ ಅವರು ಎಸ್.ಎಸ್.ಎಲ್.ಸಿ. ವಿದ್ಯಾಭ್ಯಾಸವನ್ನು ಮಂಡ್ಯದಲ್ಲಿ ಪೂರೈಸಿದರು. ಮುಂದೆ ಅವರು ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಇಂಟರ್ ಮೀಡಿಯೇಟ್ ಹಾಗೂ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ಆನರ್ಸ್ (ಇಂಗ್ಲಿಷ್) ಪದವಿ ಮತ್ತು ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಿಂದ ಎಂ.ಎ. ಪದವಿ. ಪದವಿಗಳನ್ನು ಗಳಿಸಿದರು.

ಚಿ.ನ. ಮಂಗಳಾ ಅವರು ೧೯೫೯ರ ವರ್ಷದಲ್ಲಿ ಅಧ್ಯಾಪಕಿಯಾಗಿ ಬೆಂಗಳೂರಿನ ಆಚಾರ್ಯ ಪಾಠಶಾಲಾ ಕಾಲೇಜಿನಲ್ಲಿ ತಮ್ಮ ವೃತ್ತಿ ಜೀವನವನ್ನು ಪ್ರಾರಂಭಿಸಿದರು. ಮುಂದೆ ಅವರು ಎನ್ ಎಮ್ ಕೆ ಆರ್ ವಿ ಕಾಲೇಜು ಎಂದು ಪ್ರಖ್ಯಾತವಾಗಿರುವ ರಾಷ್ಟ್ರೀಯ ಶಿಕ್ಷಣ ಟ್ರಸ್ಟ್ ಪ್ರಾರಂಭಿಸಿದ ನಾಗರತ್ನಮ್ಮ ಮೇಡಾ ಕಸ್ತೂರಿ ರಂಗಶೆಟ್ಟಿ ರಾಷ್ಟ್ರೀಯ ವಿದ್ಯಾಲಯ ಮಹಿಳಾ ಕಾಲೇಜಿನ (N.M.K.R.V) ಪ್ರಾಂಶುಪಾಲರ ಹುದ್ದೆಯನ್ನು ಯಶಸ್ವಿಯಾಗಿ ನಿರ್ವಹಿಸಿದರು. ವಿದ್ಯಾರ್ಥಿಗಳು, ಪೋಷಕರು, ಅಧ್ಯಾಪಕರು, ವಿಶ್ವವಿದ್ಯಾಲಯ ಎಲ್ಲರೊಡನೆ ಉತ್ತಮ ಸಂಬಂಧ ದೊಂದಿಗೆ ಅವರು ಕಾರ್ಯನಿರ್ವಹಿಸಿದ ರೀತಿ ಶ್ಲಾಘನೀಯ.

ದೆಹಲಿಯ ಅಮೆರಿಕ ಶಿಕ್ಷಣ ಪ್ರತಿಷ್ಠಾನ, ವಾಷಿಂಗ್‌ಟನ್ ವಿದ್ವಾಂಸರ ಅಂತಾರಾಷ್ಟ್ರೀಯ ವಿನಿಮಯ ಪರಿಷತ್ತು, ಬ್ರಿಟಿಷ್ ಕೌನ್ಸಿಲ್‌ಗಳ ಸಹಯೋಗದಿಂದ ವಿದೇಶದಲ್ಲಿನ ವಿದ್ಯಾಭ್ಯಾಸ ಪದ್ಧತಿ ಅಧ್ಯಯನ ಮಾಡಲು ೧೯೮೨ರಲ್ಲಿ ಅಮೆರಿಕ, ಇಂಗ್ಲೆಂಡ್, ಫ್ರಾನ್ಸ್ ಪ್ರವಾಸ ಕೈಗೊಂಡರು. ೧೯೮೪ರ ವರ್ಷದಲ್ಲಿ ಮತ್ತೆ ಅಮೆರಿಕ, ಇಂಗ್ಲೆಂಡ್ ಪ್ರವಾಸದ ಜೊತೆ ಯುರೋಪಿನ ಆಸ್ಟ್ರಿಯ, ಬೆಲ್ಜಿಯಂ, ಲಕ್ಸಂಬರ್ಗ್, ಫ್ರಾನ್ಸ್, ಇಟಲಿ, ಸ್ವಿಟ್ಸರ್‌ಲೆಂಡ್ ದೇಶಗಳಿಗೆ ಭೇಟಿ ನೀಡಿ ಅಲ್ಲಿನ ಶಿಕ್ಷಣ ಕ್ಷೇತ್ರದಿಂದ ಅಪಾರವಾದ ಅನುಭವಗಳನ್ನು ಹೊತ್ತು ತಂದರು.

ಚಿ.ನ.ಮಂಗಳಾ ಅವರ ಬರಹಗಳಲ್ಲಿ ಅವರ ಸುದೀರ್ಘ ಅವಧಿಯ ಅಧ್ಯಾಪನ ಮತ್ತು ಪ್ರಾಂಶುಪಾಲ ಜವಾಬ್ದಾರಿ ನಿರ್ವಹಣೆಯಲ್ಲಿ ದೊರೆತ ಅನುಭವಗಳು ವ್ಯಾಪಕವಾಗಿ ಸಂಚಲನಗೊಂಡಿವೆ. ಹೀಗಾಗಿ ಅವರ ಬರಹಗಳು ಸರ್ಕಾರಿ ಧೋರಣೆ, ವಿಶ್ವವಿದ್ಯಾಲಯದಲ್ಲಿ ಕುಗ್ಗುತ್ತಿರುವ ವಿದ್ಯಾಭ್ಯಾಸದ ಮಟ್ಟ, ವಿದ್ಯಾರ್ಥಿನಿಯರ ಅಪೇಕ್ಷೆ, ಆಶೋತ್ತರಗಳು, ಪೋಷಕರ ಅಸಹಾಯಕತೆ ಇವೆಲ್ಲದರ ವಿಶಿಷ್ಟ ಅವಲೋಕನಗಳನ್ನು ಕಟ್ಟಿಕೊಡುವಂತ ವಿಶಿಷ್ಟ ಕೃತಿಗಳಾಗಿ ಹೊರಹೊಮ್ಮಿವೆ.

ಚಿ.ನ.ಮಂಗಳಾ ಅವರು 'ಭಾರತೀಯ ಸ್ತ್ರೀ' ಲೇಖನ ಮಾಲಿಕೆಯಲ್ಲಿ ಅವರು ಹಲವಾರು ವಿದ್ವತ್ಪೂರ್ಣ ಲೇಖನಗಳನ್ನು ಸಹಾ ಪ್ರಸ್ತುತ ಪಡಿಸಿದ್ದಾರೆ. 'ಭಾರತೀಯ ಪರಿಕಲ್ಪನೆಯಲ್ಲಿ ಸರಸ್ವತಿ', ಕರ್ನಾಟಕದ ಮಹಿಳೆಯರು ಮಾಲಿಕೆಯಲ್ಲಿ 'ಆಧುನಿಕ ಕನ್ನಡ ಬರಹಗಾರ್ತಿಯರು' ಮುಂತಾದ ಹಲವಾರು ಪುಸ್ತಕಗಳು, ನ್ಯೂ ವರ್ಲ್ಡ್ ಲಿಟರೇಚರ್ ಸರಣಿಯ ಹಲವಾರು ಪುಸ್ತಕಗಳು, ಆರ್. ಕೆ. ನಾರಾಯಣರ ವೆಟಿಂಗ್ ಫಾರ್ ಮಹಾತ್ಮ ಪುಸ್ತಕದ ಅನುವಾದವಾದ 'ಮಹಾತ್ಮರ ಬರವಿಗಾಗಿ', 'ಹೆಲೆನ್ ಕೆಲರ್', 'ಅಭಾಗಿನಿ', 'ಹುಲಿಯ ಬೆನ್ನೇರಿದಾಗ', 'ಕೆನಡಾ ಕವನಗಳು', 'ಎಲ್ಲರೂ ನನ್ನವರು' ಮುಂತಾದವು ಚಿ. ನ. ಮಂಗಳಾ ಅವರ ವೈವಿಧ್ಯಪೂರ್ಣ ಬರಹಗಳಲ್ಲಿ ಸೇರಿವೆ.

ಚಿ.ನ.ಮಂಗಳಾ ಅವರು ಕನ್ನಡದ ಮೊದಲ ಮಹಿಳಾ ಪತ್ರಕರ್ತೆ, ಸಾಹಿತಿ, ಪ್ರಕಾಶಕಿ, ತಿರುಮಲಾಂಬ ಅವರ ನೆನಪಿಗಾಗಿ ಶಾಶ್ವತಿ ಸಂಸ್ಥೆಯನ್ನು ಸ್ಥಾಪಿಸಿದರು. ಈ ಮೂಲಕ ವಸ್ತು ಸಂಗ್ರಹಾಲಯ, ಮಹಿಳಾ ಅಧ್ಯಯನ ಕೇಂದ್ರಗಳ ಸ್ಥಾಪನೆಯೇ ಅಲ್ಲದೆ ಸಾಹಿತ್ಯ, ಸಂಶೋಧನೆ ಮತ್ತು ಸಮಾಜ ಕಾರ್ಯ ಕ್ಷೇತ್ರಗಳಲ್ಲಿ ಮಹತ್ವದ ಸಾಧನೆಗಳನ್ನು ಮಾಡಿದ ಮಹಿಳೆಯರಿಗೆ ಈ ಸಂಸ್ಥೆಯ ವತಿಯಿಂದ ಸದೋದಿತ ಪ್ರಶಸ್ತಿಯನ್ನು ನೀಡಲಾಗುತ್ತಿದೆ.

**ಚಿ.ನ.ಮಂಗಳಾ ಅವರಿಗೆ ಅನೇಕ ಪ್ರಶಸ್ತಿ ಗೌರವಗಳು ಸಂದಿರುತ್ತವೆ.**

ಮಾತೋಶ್ರೀ ರತ್ನಮ್ಮ ಹೆಗಡೆ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ,ರಾಜ್ಯ ಸರಕಾರದ ಬಹುಮಾನ,ಕರ್ನಾಟಕ ಸಾಹಿತ್ಯ ಪರಿಷತ್ತಿನ ಮಲ್ಲಿಕಾ ಪ್ರಶಸ್ತಿ, ಕರ್ನಾಟಕ ನಾಟಕ ಅಕಾಡೆಮಿ ಫೆಲೋಷಿಪ್,ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಮುಂತಾದವು ಇವುಗಳಲ್ಲಿ ಸೇರಿವೆ.

**ಚಿ.ನ.ಮಂಗಳಾ ಅವರ ಕೃತಿಗಳು**

ಎರಡು ಕಾದಂಬರಿಗಳು, ಮೂರು ಜೀವನ ಚರಿತ್ರೆಗಳು, ಎರಡು ಲೇಖನ ಸಂಗ್ರಹಗಳು, ಎರಡು ಸ್ಮರಣ ಗ್ರಂಥಗಳು, ಒಂದು ನಾಟಕ- ರೂಪಾಂತರ, ಒಂದು ಪ್ರವಾಸ ಕಥನ, ಐದು ಸಂಪಾದಿತ ಕೃತಿಗಳು, ಮೂರು ಅನುಭವ ಮಾಲೆ ಕೃತಿಗಳು, ಎರಡು ಸಹ ಸಂಪಾದನೆ ಕೃತಿಗಳು, ಒಂದು ಸಂಶೋಧನಾ ಪ್ರಬಂಧ.

ಮಾಹಿತಿ ಕೃಪೆ : ವಿಕಿಪಿಡಿಯಾ

Daily News

# ಪತ್ರಿಕಾ ನೆನಪು

ಎಲ್ಲಾ ದಿನ ಪತ್ರಿಕೆಗಳ ಸಂಗ್ರಹ

ಪ್ರಜಾವಾಣಿ ... ಕನ್ನಡ ಪ್ರಭ

ರಾಮಣ್ಣ ಮತ್ತು ಪುಟ್ಟಮ್ಮ
ಉಪನ್ಯಾಸ. ಉಪನ್ಯಾಸಕ
ಅಂಜನಪ್ಪ ಚಳ್ಳಕೆರೆ,
ಅಧ್ಯಕ್ಷತೆ- ಬೈರಮಂಗಲ ರಾ
ಸಂಯೋಜನೆ: ಬಿ.ಸಿ. ರಾ
ಆಯೋಜನೆ: ಬಿ.ಎಂ.ಶ್ರೀ.
ಸಂಜೆ 4.30 (ಆನ್‌ಲೈನ್

ವಿ.ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ ಪ್ರದಾನ: ಸಾಹಿತಿ ವಿಜಯಾ, ಅತಿಥಿ-ಶ್ರೀನಿವಾಸ್ ಜಿ.ಕಪ್ಪಣ್ಣ, ಪುರಸ್ಕೃತರು-ಬಿ.ಎನ್. ಸುಮಿತ್ರಾಬಾಯಿ, ಎಚ್.ಎನ್. ಆನಂದ, ಅಧ್ಯಕ್ಷತೆ-ಬೈರಮಂಗಲ ರಾಮೇಗೌಡ, ಆಯೋಜನೆ-ಬಿಎಂಶ್ರೀ ಪ್ರತಿಷ್ಠಾನ, ಸ್ಥಳ-ಎಂವಿಸೀ ಸಭಾಂಗಣ, ಬಿಎಂಶ್ರೀ ಕಲಾಭವನ, ಎನ್.ಆರ್. ಕಾಲೊನಿ, ಸಂಜೆ 5

## ಪ್ರಶಸ್ತಿಗಳಿಂದ ಹೆಚ್ಚಿದ ಜವಾಬ್ದಾರಿ

ಸಂ.ಕ.ಸಮಾಚಾರ, ಬೆಂಗಳೂರು

ಮೌಲಿಕ ಪ್ರಶಸ್ತಿಗಳು ಜವಾಬ್ದಾರಿಯನ್ನು ಹೆಚ್ಚಿಗೆ ಮಾಡುತ್ತವೆ ಎಂದು ಪ್ರಶಸ್ತಿ ಪುರಸ್ಕೃತ ಎಚ್.ಎನ್.ಆನಂದ ತಿಳಿಸಿದರು.

ಬಿಎಂಶ್ರೀ ಪ್ರತಿಷ್ಠಾನದ ವತಿಯಿಂದ ಕೊಡ ಮಾಡುವ ವಿ.ನಾಗರಾಜರಾವ್ ಮಾಧ್ಯಮ ಪ್ರಶಸ್ತಿ ಸ್ವೀಕರಿಸಿ ಬಳಿಕ ಮಾತನಾಡಿದ ಅವರು, ತಾವು ಬೆಳೆದು ಬಂದ ಬಗೆ ಮತ್ತು ತಮ್ಮ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳನ್ನು ಸ್ಮರಿಸಿಕೊಂಡರು. ಪ್ರಶಸ್ತಿ ನೀಡಿದ ವಿ.ನಾಗರಾಜರಾವ್ ಮತ್ತು ಕುಟುಂಬವನ್ನು ಮತ್ತು ಪ್ರಶಸ್ತಿಗೆ ಆಯ್ಕೆ ಮಾಡಿದ ಬಿಎಂಶ್ರೀ ಪ್ರತಿಷ್ಠಾನಕ್ಕೆ ಧನ್ಯವಾದವನ್ನು ಅರ್ಪಿಸಿದರು.

ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತೆ ಡಾ. ವಿಜಯಾ ಮಾತನಾಡಿ, ತಮ್ಮ ಮೊನಚಾದ ಬರವಣಿಗೆಯ ಮೂಲಕ ಎಚ್.ಎನ್. ಆನಂದ ಛಾಪು ಮೂಡಿಸಿದ್ದರು ಹಾಗೂ ಪತ್ರಿಕಾ ಕ್ಷೇತ್ರದಲ್ಲಿ ಎಲ್ಲರೊಂದಿಗೂ ಉತ್ತಮ ಬಾಂಧವ್ಯವನ್ನು ಹೊಂದಿದ್ದರು ಎಂದು ಹೇಳಿದರು.

ರಂಗಕರ್ಮಿ ಶ್ರೀನಿವಾಸ ಜಿ ಕಪ್ಪಣ್ಣ ಮಾತನಾಡಿ, ತಮ್ಮ ಸಹಪಾಠಿಯ ಸನ್ಮಾನ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳಲು ಅವಕಾಶ ದೊರಕಿರುವುದಕ್ಕೆ ಹೆಮ್ಮೆ ವ್ಯಕ್ತಪಡಿಸಿ ಎಚ್.ನರಸಿಂಹಯ್ಯ ಅವರ ಆಪ್ತಬಳಗದಲ್ಲಿ ಅವರು ಗುರುತಿಸಿಕೊಂಡಿದ್ದರು ಎಂದರು. ಬಿಎಂಶ್ರೀ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಡಾ.ಪಿ.ವಿ.ರಾಜಕುಮಾರ್ ಸ್ವಾಗತಿಸಿದರು. ಪ್ರತಿಷ್ಠಾನದ ಅಧ್ಯಕ್ಷ ಡಾ.ಬೈರಮಂಗಲ ರಾಮೇಗೌಡ ಅಧ್ಯಕ್ಷತೆ ವಹಿಸಿ ಮಾತನಾಡಿದರು. ಡಾ.ವಸಂತಕುಮಾರ್ ಕಾರ್ಯಕ್ರಮ ನಿರೂಪಿಸಿದರು. ಪ್ರೊ.ಎಲ್.ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿಗೆ ಭಾಜನರಾದ ಡಾ. ಬಿ.ಎನ್.ಸುಮಿತ್ರಾದೇವಿ ಅನಾರೋಗ್ಯದ ನಿಮಿತ್ತ ಕಾರ್ಯಕ್ರಮದಲ್ಲಿ ಪಾಲ್ಗೊಂಡಿರಲಿಲ್ಲ.

ಬಿಎಂಶ್ರೀ ಪ್ರತಿಷ್ಠಾನದ ವತಿಯಿಂದ ನಡೆದ ಸಮಾರಂಭದಲ್ಲಿ ಪತ್ರಕರ್ತ ಎಚ್.ಎನ್.ಆನಂದ ಅವರಿಗೆ ವಿ.ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಕೃತಿಕ ಶ್ರೀನಿವಾಸನ್ ತಂಡದಿಂದ ಶಾಸ್ತ್ರೀಯ ಸಂಗೀತ:ಆಯೋಜನೆ ಮತ್ತು ಸ್ಥಳ-ಬಿಎಂಶ್ರೀ ಪ್ರತಿಷ್ಠಾನ, ಎನ್.ಆರ್.ಕಾಲೊನಿ, ಸಂಜೆ 4.30

## ಇತಿಹಾಸದ ಪುನರ್ರಚನೆಗೆ ಪುರಾತತ್ವದ ಅಧ್ಯಯನದಿಂದ ಮಹತ್ವದ ಕೊಡುಗೆ ಸಾಧ್ಯ

---

**ಕಿರು ಪರಿಚಯ**

## ಪ್ರೊ.ಡಿ. ಅಂಜನಪ್ಪ ಚಳ್ಳಕೆರೆ

ಪ್ರೊ. ಅಂಜನಪ್ಪ ಚಳ್ಳಕೆರೆ ಅವರು ಮೂಲತಃ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆಯವರು. ಪ್ರಾಥಮಿಕ, ಮಾಧ್ಯಮಿಕ ಮತ್ತು ಕಾಲೇಜು ಶಿಕ್ಷಣವನ್ನು ಚಳ್ಳಕೆರೆಯಲ್ಲಿ ಪೂರೈಸಿದರು. ಪ್ರೌಢಶಾಲಾ ವಿದ್ಯಾಭ್ಯಾಸ ಪರಶುರಾಂಪುರದಲ್ಲಿ ನಡೆಯಿತು. ಅಭ್ಯಾಸಿಸಿದರು. ಕನ್ನಡ ಎಂ.ಎ. ಸ್ನಾತಕೋತ್ತರ ಪದವಿಯನ್ನು ಕುವೆಂಪು ವಿಶ್ವವಿದ್ಯಾನಿಲಯದಿಂದ ಪಡೆದಿದ್ದಾರೆ. ಸಾಹಿತ್ಯ ಮತ್ತು ಸಿನಿಮಾ ಇವರ ಆಸಕ್ತಿಯ ಕ್ಷೇತ್ರಗಳು. ಸಾಹಿತ್ಯ ವಿಮರ್ಶೆ ಹಾಗೂ ವೈಚಾರಿಕ ಸಾಹಿತ್ಯದ ಅಧ್ಯಯನದಲ್ಲಿ ತೊಡಗಿದ್ದಾರೆ. ಇವರು ಪ್ರಸ್ತುತ ಚಳ್ಳಕೆರೆಯ ಹೆಚ್.ಪಿ.ಪಿ.ಸಿ. ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಸ್ನಾತಕೋತ್ತರ ಕನ್ನಡ ಅಧ್ಯಯನ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

**ಪ್ರಕಟಿತ ಕೃತಿಗಳು** : ಒಡಲ ಭಾಷೆ, ವೈಚಾರಿಕತೆ ಮತ್ತು ಸಾಂಸ್ಕೃತಿಕ ರಾಜಕಾರಣ, ಕಾರಣ ಮೀಮಾಂಸೆ, ವಿಮರ್ಶೆಯ ವಿವೇಕ, ಒಳಗು ಹೊರಗು, ಎಲ್ಲ ತತ್ವಗಳ ಎಲ್ಲೆ ಮೀರಿ, ದಿಬ್ಬಂ ಪಿಡಿವಂತೆ.

## ಪ್ರಕಟಣೆ

### 'ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿ'

ಬಿ.ಎಂ.ಶ್ರೀ. ಪ್ರತಿಷ್ಠಾನವು ವಾರ್ಷಿಕವಾಗಿ ನೀಡುವ ಸೂ.ವೆಂ. ಆರಗ ವಿಮರ್ಶಾ ಪ್ರಶಸ್ತಿಗಾಗಿ ವಿಮರ್ಶಾ ಕೃತಿಗಳನ್ನು ಆಹ್ವಾನಿಸಿದೆ. ಹತ್ತು ಸಾವಿರ ರೂಪಾಯಿ ನಗದು ಹಾಗೂ ಸ್ಮರಣಿಕೆಗಳನ್ನು ಒಳಗೊಂಡಿರುವ ಈ ಪ್ರಶಸ್ತಿಯನ್ನು ೨೦೨೧ನೆಯ ಸಾಲಿನಲ್ಲಿ (ಜನವರಿ–ಡಿಸೆಂಬರ್ ಅವಧಿ) ಮೊದಲ ಆವೃತ್ತಿಯಾಗಿ ಪ್ರಕಟವಾಗಿರುವ ಕನ್ನಡದ ಅತ್ಯುತ್ತಮ ವಿಮರ್ಶಾಕೃತಿಯೊಂದಕ್ಕೆ ನೀಡಲಾಗುವುದು. ಆಸಕ್ತರು ೨೦೨೧ರಲ್ಲಿ ಪ್ರಕಟವಾಗಿರುವ ವಿಮರ್ಶಾಕೃತಿಯ ಮೂರು ಪ್ರತಿಗಳ ಜೊತೆ ಪ್ರತ್ಯೇಕ ಹಾಳೆಯಲ್ಲಿ ವಿಳಾಸ ಮತ್ತು ಮೊಬೈಲ್ ನಂ. ನಮೂದಿಸಿ ಸಲ್ಲಿಸಬೇಕು. ಕೃತಿಗಳನ್ನು ಈ ಪತ್ರಿಷ್ಠಾನದ ವಿಳಾಸಕ್ಕೆ ೧೫–೦೪–೨೦೨೨ ರ ಒಳಗೆ ಕಳುಹಿಸಬೇಕು.

## ಪ್ರಕಟಣೆ

### ೨೦೨೦ ನೇ ಸಾಲಿನ ಸಾರಂಗಿ ವೆಂಕಟರಾಮಯ್ಯ–ಪುಟ್ಟಚ್ಚಮ್ಮ ಸ್ಮಾರಕ ದತ್ತಿ ಪ್ರಶಸ್ತಿ

ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಶ್ರೀ ಎಸ್.ವಿ.ಶ್ರೀನಿವಾಸರಾವ್ ಅವರು ಸ್ಥಾಪಿಸಿರುವ ದಿ॥ ಸಾರಂಗಿ ವೆಂಕಟರಾಮಯ್ಯ–ಪುಟ್ಟಚ್ಚಮ್ಮ ದತ್ತಿ ನಿಧಿಯ ಅಡಿಯಲ್ಲಿ ೨೦೨೦ನೇ ಸಾಲಿನ ಪ್ರಶಸ್ತಿಗೆ ೨೦೨೦ರಲ್ಲಿ ಪ್ರಥಮ ಮುದ್ರಣವಾಗಿ ಪ್ರಕಟಗೊಂಡಿರುವ ನಾಟಕ ಕೃತಿಗಳನ್ನು ಆಹ್ವಾನಿಸಲಾಗಿದೆ. ನಾಟಕದ ೩ ಪ್ರತಿಗಳನ್ನು ಪ್ರತಿಷ್ಠಾನದ ಕಚೇರಿಗೆ ದಿನಾಂಕ: ೧೫–೦೪–೨೦೨೨ ರ ಒಳಗೆ ಕಳುಹಿಸಬೇಕು. ಪ್ರಶಸ್ತಿಯ ಮೊತ್ತ ೩,೦೦೦/– ರೂ.ಗಳು ಹಾಗೂ ಪ್ರಶಸ್ತಿ ಪತ್ರವನ್ನು ವಿಶೇಷ ಸಮಾರಂಭದಲ್ಲಿ ವಿತರಿಸಲಾಗುವುದು. ಈ ಸ್ಪರ್ಧೆಯು **ಉದಯೋನ್ಮುಖ ಸಾಹಿತಿಗಳಿಗೆ** ಮಾತ್ರ ಸೀಮಿತವಾಗಿದೆ. ಅವರು ಗರಿಷ್ಠ ೨ ಕೃತಿಗಳನ್ನು ಮಾತ್ರ ಪ್ರಕಟಿಸಿರಬೇಕು. ಪ್ರಥಮ ಕೃತಿಗೆ ಆದ್ಯತೆ ನೀಡಲಾಗುವುದು.

## ಕರ್ನಾಟಕ ಲೋಚನ

ನಮ್ಮ ಷಾಣ್ಮಾಸಿಕ ವಿದ್ವತ್ ಪತ್ರಿಕೆ– **ಕರ್ನಾಟಕ ಲೋಚನ** ತಮ್ಮೆಲ್ಲರ ಸಹಕಾರದಿಂದ, ಸಂಶೋಧನಾತ್ಮಕ ಲೇಖನಗಳನ್ನು ಒಳಗೊಂಡು ಸುಂದರವಾಗಿ ಮೂಡಿಬರುತ್ತಿದೆ. ಈ ಪತ್ರಿಕೆಯ ಆಜೀವ ಸದಸ್ಯರಾಗಲು ಚಂದಾಹಣ ರೂ. ೧೫೦೦/–ಮಾತ್ರ. ತಾವೆಲ್ಲರೂ ಈ ಪತ್ರಿಕೆಗೆ ಚಂದಾದಾರರಾಗಲು ವಿನಂತಿ.

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2021-2023**
**dt. 28-12-2020**
**Office of Posting: Bangalore PSO, Bangalore 560026**
**Price : Annual Subscription Rs. 20/-**
**Date of publishing and Posting : 30-03-2022**

## ಪ್ರಕಟಣೆ

### ಹಳಗನ್ನಡ ತರಗತಿಗಳು

೨೦೨೨ರ ಏಪ್ರಿಲ್ ೧೩ರಿಂದ ಹಳಗನ್ನಡ ತರಗತಿಗಳನ್ನು ಪ್ರಾರಂಭಿಸಲಾಗುತ್ತದೆ. ಆಸಕ್ತರು ೧೦ ಏಪ್ರಿಲ್ ೨೦೨೨ರೊಳಗೆ ದೂರವಾಣಿಯ ಮೂಲಕ ಅಥವಾ ಇ–ಮೇಲ್ ಮೂಲಕ ನೋಂದಾಯಿಸಿಕೊಳ್ಳಲು ಕೋರಲಾಗಿದೆ. ತರಗತಿಗಳು ಆರು ತಿಂಗಳುಗಳ ಕಾಲ ನಡೆಯಲಿದ್ದು ಹಿರಿಯ ಕನ್ನಡ ವಿದ್ವಾಂಸರು ಪಾಠಬೋಧನೆ ಮಾಡುತ್ತಾರೆ.

**ಪಠ್ಯ ವಿಷಯ : ನಾಗಚಂದ್ರನ 'ಪಂಪರಾಮಾಯಣ' ಸಂಗ್ರಹದ ಸಮಗ್ರ ಅಧ್ಯಯನ**

ಹೆಚ್ಚಿನ ಮಾಹಿತಿಗೆ ಸಂಪರ್ಕಿಸಿ : ೦೮೦೨೬೬೧೫೮೬೬

## * ಪ್ರಶಸ್ತಿ ಹಣ ಬೇಡ – ಡಾ.ಬಿ.ಎನ್.ಸುಮಿತ್ರಾಬಾಯಿ *

ಬಿಎಂಶ್ರೀ ಪ್ರತಿಷ್ಠಾನವು ಕನ್ನಡದ ಸುಪ್ರಸಿದ್ಧ ವಿದ್ವಾಂಸರೂ ವಿಮರ್ಶಕರೂ ಆದ ಪ್ರೊ.ಎಲ್.ಎಸ್.ಶೇಷಗಿರಿರಾವ್ ಅವರ ಹೆಸರಿನಲ್ಲಿ ಕೊಡಮಾಡುವ ವಿಮರ್ಶಾ ಪ್ರಶಸ್ತಿ ಪ್ರದಾನ ಸಮಾರಂಭ ೧೫.೩.೨೦೨೨ ರಂದು ನಡೆಯಿತು. ಪ್ರಶಸ್ತಿಗೆ ಆಯ್ಕೆಯಾಗಿದ್ದ ಡಾ.ಬಿ.ಎನ್.ಸುಮಿತ್ರಾಬಾಯಿ ಅವರು ಅನಾರೋಗ್ಯದ ಕಾರಣ ಸಮಾರಂಭದಲ್ಲಿ ಭಾಗವಹಿಸಲು ಸಾಧ್ಯವಾಗಲಿಲ್ಲ. ಅವರು ಪ್ರತಿಷ್ಠಾನದ ಅಧ್ಯಕ್ಷರಿಗೆ ಕರೆ ಮಾಡಿ ಹೀಗೆ ಹೇಳಿದ್ದಾರೆ.

"ಪ್ರೊ.ಎಲ್.ಎಸ್.ಶೇಷಗಿರಿರಾವ್ ಅವರ ಪ್ರೇರಣೆ, ಸ್ಫೂರ್ತಿ, ಮಾರ್ಗದರ್ಶನಗಳಿಂದಾಗಿಯೇ ನಾನು ವಿಮರ್ಶಾ ಕ್ಷೇತ್ರದಲ್ಲಿ ಉತ್ಸಾಹದಿಂದ ಕೆಲಸ ಮಾಡಲು ಸಾಧ್ಯವಾಯಿತು. ಶ್ರೀಮತಿ ಭಾರತಿ ಎಲ್.ಎಸ್.ಶೇಷಗಿರಿರಾವ್ ಅವರೊಂದಿಗೂ ಆತ್ಮೀಯ ಒಡನಾಟ ಇದೆ. ಪ್ರೊ. ಶೇಷಗಿರಿರಾಯರಂಥ ಸಾಧಕರ ಹೆಸರಿನ ಪ್ರಶಸ್ತಿಗೆ ಭಾಜನಳಾಗಿರುವುದೇ ನನಗೆ ದೊರೆತ ದೊಡ್ಡ ಗೌರವ. ನನ್ನ ಆರೋಗ್ಯ ಸರಿಯಾದ ಮೇಲೆ ಪ್ರಶಸ್ತಿಯನ್ನು ಸ್ವೀಕರಿಸುತ್ತೇನೆ. ಪ್ರಶಸ್ತಿಯೊಂದಿಗೆ ಕೊಡಲಾಗುವ ಹತ್ತು ಸಾವಿರ ರೂಪಾಯಿಗಳ ನಗದು ಪುರಸ್ಕಾರವನ್ನು ಬಿಎಂಶ್ರೀ ಪ್ರತಿಷ್ಠಾನಕ್ಕೆ ದಾನವಾಗಿ ಹಿಂದಿರುಗಿಸುತ್ತಿದ್ದೇನೆ. ಅದನ್ನು ಬಿಎಂಶ್ರೀ ಪ್ರತಿಷ್ಠಾನ ಸೂಕ್ತ ರೀತಿಯಲ್ಲಿ ಬಳಸಿಕೊಳ್ಳಬಹುದು".

**ಡಾ.ಬಿ.ಎನ್.ಸುಮಿತ್ರಾಬಾಯಿ ಅವರಿಗೆ ಧನ್ಯವಾದಗಳು.**

**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ...................................................................................

.....................................................................................................

.....................................................................................................

ವಿಳಾಸ
**ಬಿ.ಎಂ.ಶ್ರೀ. ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೬೬